

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 1542 (1871)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

ವಿಷಯ : ಆರ್.ಟಿ.ಇ ಕಾಯಿದೆಯಡಿ ಶಿಕ್ಷಣ ಮುಗಿಸಿರುವ ಬಡ ವಿದ್ಯಾರ್ಥಿಗಳ ಭವಿಷ್ಯದ ಬಗ್ಗೆ

ಅ) ರಾಜ್ಯದಲ್ಲಿ ಶಿಕ್ಷಣ ಹಕ್ಕು ಕಾಯಿದೆ (ಆರ್‌ಟಿಇ) ಯಡಿ ಖಾಸಗಿ ಶಾಲೆ ಸೇರಿದ್ದ ಬಡ ವಿದ್ಯಾರ್ಥಿಗಳು ಇದೀಗ 8ನೇ ತರಗತಿ ಮುಗಿಸಿ ಅತಂತ್ರರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಹಾಗಿದ್ದಲ್ಲಿ, ಖಾಸಗಿ ಶಾಲೆಗಳಲ್ಲಿ ಶುಲ್ಕ ಪಾವತಿಸಲು ಸಾಧ್ಯವಾಗದೇ ಅತಂತ್ರವಾಗುವ ಆರ್.ಟಿ.ಇ ಬಡ ಮಕ್ಕಳ ನೆರವಿಗೆ ಸರ್ಕಾರ ಬರುವುದೇ; ಸರ್ಕಾರವು ಯಾವ ಕ್ರಮಗಳನ್ನು ಕೈಗೊಂಡು ಈ ಬಡ ಮಕ್ಕಳ ವಿದ್ಯಾಭ್ಯಾಸ ಮುಂದುವರಿಸುವುದು; (ವಿವರ ನೀಡುವುದು)

(ಇ) ಸದರಿ ಆರ್.ಟಿ.ಇ ಬಡ ಮಕ್ಕಳ ವಿದ್ಯಾಭ್ಯಾಸವನ್ನು ಪಿ.ಯು.ಸಿ/ಎಸ್.ಎಸ್.ಎಲ್.ಸಿ ವರೆವಿಗೂ ವಿಸ್ತರಿಸುವ ಚಿಂತನೆ ಸರ್ಕಾರಕ್ಕೆ ಇದೆಯೇ;

(ಈ) 2020-21ನೇ ಸಾಲಿಗೆ ರಾಜ್ಯದಲ್ಲಿ ಪ್ರೌಢಶಾಲಾ ವಿದ್ಯಾಭ್ಯಾಸದ ಮಧ್ಯದಲ್ಲಿ ಆರ್.ಟಿ.ಇ ಅಡಿ ಎಷ್ಟು ಬಡ ಮಕ್ಕಳು 8ನೇ ತರಗತಿ ಮುಗಿಸಿ ಅತಂತ್ರರಾಗುವರು; (ಜಿಲ್ಲಾವಾರು ವಿವರ ಒದಗಿಸುವುದು)

(ಉ) ಇಷ್ಟೂ ಬಡ ಮಕ್ಕಳು ಖಾಸಗಿ ಶಾಲೆಗಳ ಶುಲ್ಕ ತುಂಬಲು ಸಾಧ್ಯವಾಗದೇ ವಿದ್ಯಾಭ್ಯಾಸ ಮೊಟಕುಗೊಳಿಸಿ ಶಾಲೆಗಳಿಂದ ಹೊರಗುಳಿದರೆ ಸರ್ಕಾರ ಕೈಗೊಂಡ ಕ್ರಮಗಳೇನು?